**ಮುಂಜಾವು**
ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114
6ನೇ ವರ್ಷ 15ನೇ ಸಂಚಿಕೆ ಕೊಪ್ಪ 6-12-1987 ಭಾನುವಾರ ಬೆಲೆ 50 ಪೈಸೆ

## ಬರದ ಪರಿವೆಯಿಲ್ಲದ 'ಬಿಳಿಯಾನೆಗಳು'

ಶೃಂಗೇರಿ: ದೇಶವೆಲ್ಲಾ ಬರದ ದವಡೆಗೆ ಸಿಕ್ಕಿ, ರಾಜ್ಯ ಎಂದೂ ಕಂಡರಿಯದ ಆರ್ಥಿಕ ಸಂಕಷ್ಟದಲ್ಲಿದ್ದರೆ, ಸರ್ಕಾರದ ಬಿಳಿಯಾನೆಗಳು ಶ್ರೀ ಸಾಮಾನ್ಯನ ತೆರಿಗೆ ಹಣವನ್ನು ಹೇಗೆ ತಮ್ಮ 'ತೀರ್ಥ' ಯಾತ್ರೆ, ಮೋಜು, ದರ್ಬಾರಿಗೆ ಚೆಲ್ಲಾಡುತ್ತವೆ ಎಂಬುದಕ್ಕೆ ಒಂದು ಅತಿ ಕೆಟ್ಟ ಉದಾಹರಣೆ ಶೃಂಗೇರಿಯಲ್ಲಿ ನ. 28ರಂದು ಕಾಣಸಿಕ್ಕಿತು.

ಆರು ಸರ್ಕಾರಿ ಕಾರುಗಳಲ್ಲಿ ಬಂದಿದ್ದ 'ಖುಷ್ಕಿ ಜಮೀನು ಅಭಿವೃದ್ಧಿ ಮಂಡಳಿ'ಗಳ ಛೇರ್ಮನ್‌ಗಳೆಂಬ ಖೂಳರು ಶೃಂಗೇರಿಯಲ್ಲಿ ಪ್ರವಾಸಿ ಮಂದಿರಕ್ಕಾ ಮಠಕ್ಕಾ ಕಾರು ಓಡಾಡಿಸಿದ್ದಕ್ಕೆ ಲೆಕ್ಕವಿಲ್ಲ. ಎಲ್ಲೋ ಉಡುಪಿಗೆ ಹೋಗಿದ್ದುವಂತೆ ಕಡೂರಲ್ಲೋ ಶಿವಮೊಗ್ಗದಲ್ಲೋ ಮೀಟಿಂಗ್ ಇತ್ತಂತೆ. ದಾರಿಯಲ್ಲಿ ಒಂದಿಷ್ಟು ತೀರ್ಥಯಾತ್ರೆಯನ್ನು ಮುಗಿಸಿ ಹೋಗಲು ಶೃಂಗೇರಿಯಲ್ಲಿ ತಂಗಿದುವಂತೆ; ಬೆಳಗಿನಿಂದ ರಾತ್ರಿ ತನಕ ಎಷ್ಟು ಬಾರಿ 'ತೀರ್ಥ-ಪ್ರಸಾದ ಸೇವೆ ಆಯಿತೋ!

ಸಂಜೆಯ ಹೊತ್ತಿಗೆ ಇವುಗಳ ಹುಚ್ಚು ದರ್ಬಾರಿನಿಂದ ರೋಸಿ ಹೋದ ಸಾಮಾನ್ಯ ಜನ ಉದ್ರಿಕ್ತಗೊಳ್ಳತೊಡಗಿದರು. ಅಷ್ಟರಲ್ಲಿ ಈ ರಣಹದ್ದುಗಳು ತಮ್ಮ ಮುಂದಿನ 'ತೀರ್ಥ' ಕ್ಷೇತ್ರಕ್ಕೆ ಹಾರಿ ಹೋದವು.

ಅವುಗಳು ತಂದಿದ್ದ ಕಾರುಗಳು: ಸಿಟಿಜೆ 528, ಸಿಎಜಿ 1706, 5482, 6208, 6707 ಮತ್ತು 6712. ಗುಲ್ಬರ್ಗ, ಬೆಳಗಾವಿ, ಬೆಂಗಳೂರು, ಮೈಸೂರು ಮತ್ತು ಕಡೂರಿನಿಂದ ಇವು ಬಂದಿದ್ದವು.

### ಹೈಕೋರ್ಟ್ ತಡೆಯಾಜ್ಞೆ ಕಾರಣ ಕೊಪ್ಪ ಟಿ. ಎ. ಪಿ. ಸಿ. ಎಂ. ಎಸ್.ನ

# ಅಧ್ಯಕ್ಷ ಚುನಾವಣೆ ಮುಂದೂಡಿಕೆ

**ಕೊಪ್ಪ : ಡಿಸೆಂಬರ್ 5ರಂದು ನಡೆಯಲು ನಿಗದಿಯಾಗಿದ್ದ ಇಲ್ಲಿನ ತಾ.ವ್ಯ.ವ್ಯಾ.ಸ. ಸಂಘದ ಅಧ್ಯಕ್ಷರ ಚುನಾವಣೆ ಹೈಕೋರ್ಟ್ ತಡೆಯಾಜ್ಞೆಯ ಕಾರಣ ನಡೆಯಲಿಲ್ಲ**

ಸಂಘದ ಕಾರ್ಯಕಾರಿ ಸಮಿತಿಯ ಚುನಾವಣೆಯಲ್ಲಿ ಭಾಗವಹಿಸಲು ಹೇರೂರಿನ ವ್ಯವಸಾಯ ಸೇವಾ ಸಹಕಾರ ಸಂಘದಿಂದ ಆರಿಸಿ ಬಂದಿದ್ದ ರಂಗನಾಥ್ ಎಂಬ ಪ್ರತಿನಿಧಿಯ ಆಯ್ಕೆಯ ಕ್ರಮಬದ್ಧತೆಯನ್ನು ಚಂದ್ರೇಗೌಡ, ನರಸಿಂಹ ಶಾಸ್ತ್ರಿ ಮತ್ತು ಪಟ್ಟಾಭಿ ಎಂಬವರು ಹೈಕೋರ್ಟಿನಲ್ಲಿ ಪ್ರಶ್ನಿಸಿದ್ದು, ಈ ಸಂಬಂಧದಲ್ಲಿ ಅಧ್ಯಕ್ಷ ಚುನಾವಣೆಯ ಫಲಿತಾಂಶ ಪ್ರಕಟಣೆಗೆ ಹೈಕೋರ್ಟ್ ತಡೆಯಾಜ್ಞೆ ನೀಡಿದೆ.

(ಹೇರೂರಿನ ಚುನಾವಣೆಯ ಬಗೆಗೆ "ಸಾ॥ ಸಂಘದ ಚುನಾವಣೆ : ಜನತಾ ಎಡವಟ್ಟು" ಎಂಬ ಶೀರ್ಷಿಕೆಯಲ್ಲಿ ನ. 15ರ 'ಮುಂಜಾವು' ವರದಿಯನ್ನು ನೋಡಬಹುದು.)

**ಕೆಸವೆ ಶಾಂತಾರಾಂ ಪ್ರಕರಣದಲ್ಲೂ ಹೈಕೋರ್ಟ್ ತಡೆಯಾಜ್ಞೆ**

ಇದೇ ರೀತಿಯಲ್ಲಿ ಕೆಸವೆ ಸಹಕಾರ ಸಂಘದಿಂದ ಆರಿಸಿ ಬಂದಿದ್ದ ಕೆ. ಎಸ್. ಶಾಂತಾರಾಂ ಅವರನ್ನು ಕಾರ್ಯಕಾರಿ ಸಮಿತಿಯ ಚುನಾವಣೆಯಿಂದ ಅನರ್ಹಗೊಳಿಸಿದ್ದ ಚುನಾವಣಾಧಿಕಾರಿಗಳ (ತಹಸೀಲ್ದಾರ್) ಆಜ್ಞೆಗೂ ಹೈಕೋರ್ಟ್ ತಡೆಯಾಜ್ಞೆ ನೀಡಿದೆ.

ಶಾಂತಾರಾಂ ತಾ. ವ್ಯ. ವ್ಯಾ. ಸ. ಸಂಘದ ಕಾರ್ಯಕಾರಿ ಸಮಿತಿಯ ಚುನಾವಣೆಯಲ್ಲಿ ನಾಮಪತ್ರ ಸಲ್ಲಿಸಿದ್ದರು. ಆದರೆ ಕೆಸವೆ ಸಹಕಾರ ಸಂಘವನ್ನೇ ಸಹಕಾರ ಸಂಘಗಳ ರಿಜಿಸ್ಟ್ರಾರ್‌ರವರು ರದ್ದುಪಡಿಸಿದ್ದಾರೆಂಬ ನೆಲೆಯಲ್ಲಿ ಅವರ ನಾಮಪತ್ರವನ್ನು ಅನರ್ಹಗೊಳಿಸಲಾಗಿತ್ತು.

ಈ ಕ್ರಮದ ಜಾರಿಗೆ ತಡೆಯಾಜ್ಞೆ ನೀಡಿರುವ ನ್ಯಾಯಮೂರ್ತಿ ಬೋಪಣ್ಣನವರು, ಬೇರೆಲ್ಲ ಚುನಾಯಿತ ನಿರ್ದೇಶಕರಂತೆಯೇ ಅಧ್ಯಕ್ಷ ಚುನಾವಣೆಯಲ್ಲಿ ಭಾಗವಹಿಸಲು ಶಾಂತಾರಾಂಗೆ ಅವಕಾಶ ಕಲ್ಪಿಸಿದ್ದಾರೆ. ಆದರೆ ಈ ಭಾಗವಹಿಸುವಿಕೆಯು ಈ ಪ್ರಕರಣದ ಅಂತಿಮ ತೀರ್ಪಿಗೆ ಒಳಪಟ್ಟಿರುತ್ತದೆ.

## ಕಿರು ನೀರು ಪೂರೈಕೆ ಯೋಜನೆ ಉದ್ಘಾಟನೆ

ಲೋಕನಾಥಪುರ : ರಾಷ್ಟ್ರೀಯ ನೀರು ಪೂರೈಕೆ ಯೋಜನೆಯಡಿ, 67,500 ರೂ. ಅಂದಾಜು ವೆಚ್ಚದ ಕಿರು ನೀರು ಪೂರೈಕೆ ಯೋಜನೆಯನ್ನು ಶಾಸಕ ಗೋವಿಂದಗೌಡರು ಇಲ್ಲಿ ಡಿ. 5ರಂದು ಉದ್ಘಾಟಿಸಿದರು. ಆನಂದರಾಮ ಭಟ್ ಅಧ್ಯಕ್ಷತೆ ವಹಿಸಿದ್ದು, ಬಿ.ಜಿ. ಚಿದಂಬರ್ ಮುಖ್ಯ ಅತಿಥಿಯಾಗಿದ್ದರು. ಕೆ. ಎಸ್. ಕಾಡಪ್ಪ ಗೌಡ, ಕೋಣಂಬಿ ರಾಮಯ್ಯ, ಬಿ. ಎನ್. ಭಾಸ್ಕರ್ ಸಮಾರಂಭದಲ್ಲಿ ಹಾಜರಿದ್ದರು. ಶ್ರೀನಿವಾಸ್ ಸ್ವಾಗತಿಸಿ ಚನ್ನಕೇಶವ ವಂದಿಸಿದರು.

(ವರದಿ : ಎಂ ಆರ್. ಭಾಸ್ಕರ್.)

## ಶೃಂಗೇರಿ, ಕೊಪ್ಪಕ್ಕೆ ಇನ್ನಷ್ಟು ಸರ್ಕಾರಿ ಬಸ್‌ಗಳು

ಚಿಕ್ಕಮಗಳೂರು : ಇಲ್ಲಿಂದ ಶೃಂಗೇರಿಗೆ ಇನ್ನೂ 2 ಬಸ್‌ಗಳನ್ನು ಹಾಗೂ ಕೊಪ್ಪಕ್ಕೆ ಒಂದು ಬಸ್ಸನ್ನು ಓಡಿಸಲು ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗೆ ಪರವಾನಗಿಗಳನ್ನು ನೀಡಲಾಗಿದೆಯೆಂದು ವರದಿಯಾಗಿದೆ.

ಬೆಳಗ್ಗೆ 7-30ಕ್ಕೆ ಇಲ್ಲಿಂದ ಶೃಂಗೇರಿಗೆ ಹೊರಟು ಶೃಂಗೇರಿಯಿಂದ 10-45ಕ್ಕೆ ಇಲ್ಲಿಗೆ ತಲುಪುವಂತೆ ಹಾಗೂ ಮಧ್ಯಾಹ್ನ 2-40ಕ್ಕೆ ಇಲ್ಲಿಂದ ಹೊರಟು, ಸಂಜೆ 6-30ಕ್ಕೆ ಶೃಂಗೇರಿಯಿಂದ ಇಲ್ಲಿಗೆ ಹೊರಡುವಂತೆ ಪರವಾನಗಿ ನೀಡಲಾಗಿದೆ.

ಸಂಜೆ 6-45ಕ್ಕೆ ಇಲ್ಲಿಂದ ಕೊಪ್ಪಕ್ಕೆ ಹೊರಡುವ ಬಸ್ ರಾತ್ರಿ ಅಲ್ಲೇ ತಂಗಿ ವಾಪ್ಸು ಬೆಳಗ್ಗೆ 6-30ಕ್ಕೆ ಕೊಪ್ಪದಿಂದ ಹೊರಡುತ್ತದೆ ಎಂದು ವರದಿ ತಿಳಿಸಿದೆ.

### ಶೃಂಗೇರಿಯ ಜೆ. ಸಿ. ಬಿ. ಎಂ. ಕಾಲೇಜಿನಲ್ಲಿ

## ಎನ್. ಸಿ. ಸಿ. ದಿನಾಚರಣೆ

ಶೃಂಗೇರಿ: ಇಲ್ಲಿನ ಜೆ. ಸಿ. ಬಿ. ಎಂ. ಕಾಲೇಜಿನಲ್ಲಿ ಉಡುಪಿಯ 5ಎ/21 ಕರ್ನಾಟಕ ಬೆಟಾಲಿಯನ್‌ಗೆ ಸೇರಿದ ಎನ್.ಸಿ.ಸಿ. ಕೆಡೆಟ್‌ಗಳು ನ. 28ರಂದು ಎನ್.ಸಿ.ಸಿ. ದಿನಾಚರಣೆಯನ್ನು ಆಚರಿಸಿದರು. ಕಾಲೇಜಿನ ಪ್ರಿನ್ಸಿಪಾಲ್ ಪ್ರೊ॥ ಎಂ. ಕೃಷ್ಣಪ್ಪಯ್ಯ ಧ್ವಜಾರೋಹಣ ನೆರವೇರಿಸಿ ವಂದನೆ ಸ್ವೀಕರಿಸಿದರು

ಮಧ್ಯಾಹ್ನ ಕಾಲೇಜಿನ ಉಪಪ್ರಿನ್ಸಿಪಾಲ್ ಎ. ಕೆ. ಭಟ್ ಅವರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯಕ್ರಮದಲ್ಲಿ ತಹಸೀಲ್ದಾರ್ ಪ್ರಭಾಕರ ಶರ್ಮ ಮುಖ್ಯ ಅತಿಥಿಗಳಾಗಿದ್ದರು. ಹಂಗಾಮಿ ಎನ್. ಸಿ. ಸಿ ಅಧಿಕಾರಿ ಹಯವದನ ಉಪಾಧ್ಯಾಯ ಸ್ವಾಗತಿಸಿದರು. ಎನ್.ಸಿ.ಸಿ. ಕೆಡೆಟ್‌ಗಳಿಂದ ಮನರಂಜನಾ ಕಾರ್ಯಕ್ರಮ ನಡೆಯಿತು. ಅಂಡರ್ ಆಫೀಸರ್ ಎಸ್. ಸುಭಾಷ್ಚಂದ್ರ ಯೋಗ ಪ್ರದರ್ಶನ ನೀಡಿದರು. ಈ ಸರಳ, ಸುಂದರ ಸಮಾರಂಭದ ಕೊನೆಯಲ್ಲಿ ಸೀನಿಯರ್ ಅಂಡರ್ ಆಫೀಸರ್ ಟಿ. ಸಿ. ರಾಜೇಂದ್ರ ವಂದಿಸಿದರು.

**ಅಣಕ ಯುದ್ಧ ಪ್ರದರ್ಶನ**

ನ. 30 ರಂದು ಕೆಡೆಟ್‌ಗಳು ಕಾಲೇಜು ಆವರಣದಲ್ಲಿ ಅಣಕ ಯುದ್ಧವನ್ನು ರೋಮಾಂಚಕಾರಿಯಾಗಿ ಪ್ರದರ್ಶಿಸಿದರು. ಕಾಲೇಜಿನ ಪ್ರಿನ್ಸಿಪಾಲರೂ, ಉಪನ್ಯಾಸಕ ವರ್ಗ ಮತ್ತು ವಿದ್ಯಾರ್ಥಿಗಳು ಪ್ರದರ್ಶನವನ್ನು ವೀಕ್ಷಿಸಿದರು.

## ಕೊಪ್ಪ ಅರಣ್ಯ ವಿಭಾಗದಲ್ಲಿ 2 ಉಪ ವಿಭಾಗ ರಚನೆ

ಕೊಪ್ಪ : ಇಲ್ಲಿನ ಅರಣ್ಯ ವಿಭಾಗದಡಿಯಲ್ಲಿ ಕೊಪ್ಪ ಮತ್ತು ಕುದುರೆಮುಖ— ಹೀಗೆ ಎರಡು ಉಪ ವಿಭಾಗಗಳನ್ನು ರಚಿಸಲಾಗಿದೆ. ಕೊಪ್ಪ ಉಪ ವಿಭಾಗಕ್ಕೆ, ಎ.ಸಿ.ಎಫ್. ಆಗಿ, ಈವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ 'ಕಾರ್ಯ ನಿರ್ವಾಹಕ ಸಹಾಯಕ'ರಾಗಿದ್ದ ಎ.ಬಿ. ಅಪ್ಪಣ್ಣ ಅವರೂ, ಕಳಸದಲ್ಲಿ ಕಛೇರಿ ಹೊಂದಿರುವ ಕುದುರೆಮುಖ ಉಪ ವಿಭಾಗಕ್ಕೆ ಎಚ್. ಎಂ. ವಿಶ್ವನಾಥ್ ಎಂಬವರೂ ನೇಮಕಗೊಂಡಿದ್ದಾರೆ.

## ಕ್ಯಾನ್ಸರ್ ರೋಗಿಗೆ 1000 ರೂ. ಸಹಾಯ ಧನ

ಕೊಪ್ಪ : ಇಲ್ಲಿಗೆ ಸಮೀಪದ ಹುಲ್ಲುಮಕ್ಕಿಯ ಕೃಷಿ ಕಾರ್ಮಿಕರಾದ ಪಿಸರಿ ಎಂಬವರಿಗೆ ಬಾಯಿ ಕ್ಯಾನ್ಸರಿನ ಚಿಕಿತ್ಸೆಗಾಗಿ ಮುಖ್ಯ ಮಂತ್ರಿಗಳ ಪರಿಹಾರ ನಿಧಿಯಿಂದ 1000 ರೂ.ಗಳ ನೆರವು ಬಂದಿದೆ. ಈ ಮೊತ್ತದ ಚೆಕ್ಕನ್ನು ಈಚೆಗೆ ಶಾಸಕ ಗೋವಿಂದ ಗೌಡರು ರೋಗಿಯ ಪತ್ನಿಗೆ ನೀಡಿದರು.

## ಮ್ಯಾಮ್ಕೋಸ್ ಉಗ್ರಾಣಗಳ ಉದ್ಘಾಟನೆ

ಕೊಪ್ಪ : ಶಿವಮೊಗ್ಗದ ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘದವರು ಕೊಪ್ಪ, ಶೃಂಗೇರಿಗಳಲ್ಲಿ ಕಟ್ಟಿಸಿರುವ ಹೊಸ ಉಗ್ರಾಣ ಕಟ್ಟಡಗಳ ಉದ್ಘಾಟನೆಯನ್ನು ಸಂಘದ ಉಪಾಧ್ಯಕ್ಷರಾದ ಡಾ॥ ಬಿ.ಎಸ್. ರಂಗಪ್ಪ ಈಚೆಗೆ ನೆರವೇರಿಸಿದರು.

ಕೊಪ್ಪದ ಸಮಾರಂಭದ ಅಧ್ಯಕ್ಷತೆಯನ್ನು ಪಿ. ಜಿ. ಗುರ್ಜಾರ್ ವಹಿಸಿದ್ದರು. ಆನಂದರಾಮ ಭಟ್ ಸ್ವಾಗತಿಸಿ, ಎ. ಎನ್. ನಾಗೇಶ್ ವಂದಿಸಿದರು. ಶೃಂಗೇರಿಯ ಸಭೆ ಕೆ. ಆರ್. ಅಣ್ಣಯ್ಯ ಹೆಗ್ಗಡೆಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಅನಂತ ಪದ್ಮನಾಭ ಶರ್ಮ ಸ್ವಾಗತಿಸಿದರು.

## ಸಚಿವ ಬಿ. ಎಲ್. ಶಂಕರ್ ಪ್ರವಾಸ ಕಾರ್ಯಕ್ರಮ

(ಹಲವು ಜನ ಓದುಗರ ಅಪೇಕ್ಷೆಯಂತೆ, ಜಿಲ್ಲಾ ಸಚಿವರಾದ ಬಿ. ಎಲ್. ಶಂಕರ್ ಅವರನ್ನು ಭೇಟಿ ಮಾಡಲು ಬಯಸುವ ಜನಸಾಮಾನ್ಯರ ಅನುಕೂಲಕ್ಕಾಗಿ, ಮುಂದಿನ ಒಂದು ವಾರದ ಅವರ ಪ್ರವಾಸ ಕಾರ್ಯಕ್ರಮಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ಪ್ರಕಟಿಸಿದ್ದೇವೆ. ಅವರ ಪ್ರವಾಸ ಕಾರ್ಯಕ್ರಮಗಳ ಪಟ್ಟಿ ಸಕಾಲದಲ್ಲಿ ಸಿಕ್ಕಾಗಲೆಲ್ಲ ಹೀಗೆ ಪ್ರಕಟಿಸುವ ಉದ್ದೇಶವಿದೆ. —ಸಂ.)

8.12.87 ಬೆಳಗ್ಗೆ ಶಿವಮೊಗ್ಗ, ಮಧ್ಯಾಹ್ನ ಚಿಕ್ಕಮಗಳೂರು, ಸಂಜೆ 5.45 ಕ್ಕೆ ಕಡೂರು, ರಾತ್ರಿ ಚಿಕ್ಕಮಗಳೂರು ವಾಸ್ತವ್ಯ.

9.12.87 ಚಿಕ್ಕಮಗಳೂರು—ವಿವಿಧ ಕಾರ್ಯಕ್ರಮಗಳು, ರಾತ್ರಿ ಮೂಡಿಗೆರೆ ವಾಸ್ತವ್ಯ.

10.12.87 ಬೆಳಗ್ಗೆ 10.30ಕ್ಕೆ ಬಾಳೆಹೊನ್ನೂರು, ಮ. ಚಿಕ್ಕಮಗಳೂರು, ವಾಸ್ತವ್ಯ.

11.12.87 ಚಿಕ್ಕಮಗಳೂರು. ರಾತ್ರಿ ಮೂಡಿಗೆರೆ ವಾಸ್ತವ್ಯ

12.12.87 ಬೆ. ಬೆಂಗಳೂರಿಗೆ

# ಪ್ರಮುಖ ಚರ್ಚೆಗಳ ವೇಳೆ ಭಣಗುಡುವ ಲೋಕಸಭೆ

ದೇಶದ ವಿವಿಧ ಭಾಗಗಳಲ್ಲಿನ ಆಗು-ಹೋಗುಗಳ ಬಗ್ಗೆ ಗಂಭೀರವಾದ ಚರ್ಚೆ ನಡೆಸಿ, ಸಮಸ್ಯೆಗಳಿಗೆ ಪರಿಹಾರ ಮಾರ್ಗ ರೂಪಿಸಲೆಂದು ಪ್ರಜಾಪ್ರತಿನಿಧಿಗಳನ್ನು ದೇಶದ ಎಲ್ಲೆಡೆಗಳಿಂದ ಆರಿಸಿ ಕಳಿಸಿ, ಅವರ ಯೋಗ ಕ್ಷೇಮ, ಖರ್ಚು-ವೆಚ್ಚಗಳಿಗಾಗಿ ಈ ದೇಶ ಕೋಟ್ಯಂತರ ರೂ.ಗಳನ್ನು ಖರ್ಚು ಮಾಡುತ್ತಿದೆ. ಆದರೆ ಆ ಜನ ಪ್ರತಿನಿಧಿಗಳಾದರೋ ತಮ್ಮ ಕರ್ತವ್ಯದ ಬಗ್ಗೆ ಯಾವುದೇ ಜವಾಬ್ದಾರಿ, ಹೇಳುವವರು-ಕೇಳುವವರು ಇಲ್ಲದವರಂತೆ ಬಹು ಮುಖ್ಯ ಚರ್ಚೆಗಳ ವೇಳೆ ಕೂಡ ಸದನಗಳಿಗೆ ಗೈರು ಹಾಜರಾಗುವುದು ನಮ್ಮ ದೇಶದ ಅತ್ಯುನ್ನತ ಪ್ರಜಾ ಪ್ರತಿನಿಧಿ ಸಭೆಯಾದ ಲೋಕಸಭೆಯಲ್ಲಿ ಕೂಡ ಸರ್ವೇ ಸಾಮಾನ್ಯವಾದ ಸಂಗತಿಯಾಗಿದೆ.

**ಖಾಲಿ ಕುರ್ಚಿಗಳು**

ಚಳಿಗಾಲದ ಅಧಿವೇಶನದ ಆರಂಭದಿಂದಲೇ ಲೋಕಸಭೆಯನ್ನು ಪೀಡಿಸುತ್ತಿರುವ ಸದಸ್ಯರ ಗೈರು ಹಾಜರಿ ಮೂರನೇ ವಾರ ಗಡಿ ಮೀರಿದ್ದು ಪ್ರಮುಖ ಮಸೂದೆ ಹಾಗೂ ವಿಷಯಗಳ ಚರ್ಚೆಯಾಗುವಾಗ ಕೂಡ ಖಾಲಿ ಕುರ್ಚಿಗಳು ಎದ್ದು ತೋರುತ್ತಿದ್ದವು.

ಮುಕ್ತಾಯವಾದ ಈ ವಾರ ಬರ ಪರಿಸ್ಥಿತಿ ಹಾಗೂ ಬೆಲೆ ಏರಿಕೆ ಬಗೆಗೆ ಎರಡು ಪ್ರಮುಖ ಚರ್ಚೆ ಇದ್ದವು. ಆದರೆ 544 ಸದಸ್ಯರ ಲೋಕಸಭೆಯುಲ್ಲಿ ಹಾಜರಿದ್ದವರು 40 ಮಂದಿ ಮಾತ್ರ. ರಾಷ್ಟ್ರವನ್ನು ತಲ್ಲಣಗೊಳಿಸಿದ ಸತಿ ಸಹಗಮನಕ್ಕೆ ಕೂಡ ಅದೇ ಗತಿಯಾಯಿತು. ರೂಪ್ ಕನ್ವರ್ ಸಹಗಮನದ ಚರ್ಚೆಯಾಗುವಾಗ ಹಾಜರಿದ್ದವರು 72 ಮಂದಿ ಮಾತ್ರ. ನಂತರ ಆ ಸಂಖ್ಯೆ 20ಕ್ಕೆ ಇಳಿಯಿತು !

**ಸಂವಿಧಾನ ತಿದ್ದುಪಡಿಯೂ ಲೆಕ್ಕಕ್ಕಿಲ್ಲ**

ಮೂರನೇ ವಾರ ಜನತಾ ಪ್ರಾತಿನಿಧ್ಯ ಮಸೂದೆ ಚರ್ಚೆಯಾದಾಗ ಹಾಜರಾತಿ ತೀರಾ ಕಡಿಮೆ ಇತ್ತು. ಮುಂದೆ ಸಂವಿಧಾನ (ತಿದ್ದುಪಡಿ) ಮಸೂದೆ ಚರ್ಚೆಗೆ ಬಂದಾಗ ಪಕ್ಷದ ಸಚೇತಕರ ಆಜ್ಞೆಯಿಂದಾಗಿ ಸದಸ್ಯರ ಹಾಜರಾತಿ 350ಕ್ಕೇರಿತು. ಇದು ಗಮನಾರ್ಹ ಸಂಖ್ಯೆ ನಿಜವಾದರೂ ಉಳಿದ ಸುಮಾರು 200 ಮಂದಿ ಸದಸ್ಯರಿಗೆ ಸಂವಿಧಾನ ತಿದ್ದುಪಡಿ ಗಮನ ಸೆಳೆಯದಿದ್ದುದು ಆಶ್ಚರ್ಯ ಹುಟ್ಟಿಸುತ್ತದೆ.

ಗುರುವಾರ ಬೆಲೆ ಏರಿಕೆ ಕುರಿತು ಚರ್ಚೆ ನಡೆದಾಗ ಹಾಜರಿದ್ದವರು ಕೇವಲ 30 ಮಂದಿ. ಅಂತಹ ಪೂರ್ಣ ಪ್ರಮಾಣದ ಚರ್ಚೆ ಅಗತ್ಯವೆಂದು ನೀಡಿದ್ದ ಅವಕಾಶಕ್ಕೆ ಸಿಕ್ಕಿದ ಪ್ರತಿಕ್ರಿಯೆ ಇಂಥದು.

ಇಂತಹ ಅಲಕ್ಷ್ಯಕ್ಕೆ ಸಚಿವರು ಕೂಡ ಹೊರತಲ್ಲ. ಬಹಳಷ್ಟು ವೇಳೆ ಹಾಜರಿದ್ದುದು ಉಕ್ಕು ಸಚಿವ ಎಂ. ಎಲ್. ಫೋತೆದಾರ್ ಮಾತ್ರ. ಚರ್ಚೆಯ ಮುಕ್ತಾಯದ ವೇಳೆಗೆ ಆಹಾರ-ನಾಗರಿಕ ಪೂರೈಕೆ ಸಚಿವ ಎಚ್. ಕೆ.ಎಲ್. ಭಗತ್ ಹಾಜರಾದರು.

**ಮಸೂದೆ ಅಂಗೀಕಾರವಾಗುವಾಗಲೂ ಕೋರಂ ಇಲ್ಲ**

ಮಸೂದೆಗಳು ಅಂಗೀಕೃತವಾಗುವಾಗ ಕೂಡ ಕೋರಂ ಇಲ್ಲದಿರುವುದು ಇದೆ. ಎರಡು ವಾರ ಹಿಂದೆ ವಾಯು (ಮಾಲಿನ್ಯ ತಡೆ) ಮಸೂದೆ ಅಂಗೀಕೃತವಾಗುವಾಗ ಲೋಕಸಭೆಯುಲ್ಲಿದ್ದವರು 16 ಸದಸ್ಯರು ಮಾತ್ರ ! ಕಳೆದ ವಾರ ಸಂವಿಧಾನ ತಿದ್ದುಪಡಿ ಮಸೂದೆಯನ್ನು ಮತಕ್ಕೆ ಹಾಕುವ ಸಂದರ್ಭ ಬಂದಾಗ ಕೇವಲ 47 ಸದಸ್ಯರಿದ್ದ ಕಾರಣ ಸದನವನ್ನು ನಿಗದಿತ ವೇಳೆಗಿಂತ ಒಂದು

(3ನೇ ಪುಟಕ್ಕೆ)

# 'ಸತಿ' ಧಾರ್ಮಿಕ ಆಚರಣೆಯಲ್ಲ — ತೀರ್ಪು

'ಸತಿ' ಪದ್ಧತಿಯ ಆಚರಣೆಗೆ ಅಥವಾ ಅದರ ವೈಭವೀಕರಣಕ್ಕೆ ಧಾರ್ಮಿಕ ಮಾನ್ಯತೆಯಿಲ್ಲ. ವೇದದಲ್ಲಾಗಲಿ, ಬೇರಾವುದೇ ಧರ್ಮಗ್ರಂಥಗಳಲ್ಲಾಗಲಿ ವಿಧವೆಯನ್ನು ಸುಡುವುದನ್ನು ಅಥವಾ ಆಕೆ ಸಹಗಮನ ಮಾಡುವುದನ್ನು ನಿರ್ದೇಶಿಸಿಲ್ಲ. ಆದ್ದರಿಂದ ಸತಿ ಆಚರಣೆ ಒಂದು ಧಾರ್ಮಿಕ ಹಕ್ಕು ಎಂಬ ವಾದ ಸಮರ್ಥನೀಯವಲ್ಲ. ಆದ್ದರಿಂದ ಸಹಗಮನ ಅಥವಾ ವಿಧವಾ ದಹನವನ್ನು ನಿಷೇಧಿಸುವ ಕಾನೂನು ಹಿಂದೂ ಧರ್ಮದವರ ಮೂಲಭೂತ ಧಾರ್ಮಿಕ ಹಕ್ಕಿನ ಉಲ್ಲಂಘನೆಯಾಗಲಿ ಅಪಮಾನವಾಗಲಿ ಅಲ್ಲ.

—ಹೀಗೆಂದು ರಾಜಾಸ್ತಾನ್ ಹೈಕೋರ್ಟಿನ ಹಂಗಾಮಿ ಮುಖ್ಯ ನ್ಯಾಯಾಧೀಶ ನ್ಯಾ|| ಗುಮನ್‌ಮಲ್ ಲೋಧಾ ಮತ್ತು ನ್ಯಾ|| ಪ್ರಾಣಚಂದ್ ಜೈನ್ ಅವರಿದ್ದ ವಿಭಾಗೀಯ ನ್ಯಾಯ ಪೀಠ ನ. 27ರಂದು ತೀರ್ಪಿತ್ತಿದೆ.

ಈ ತೀರ್ಪಿಗೆ ಆಧಾರ ಪ್ರಮಾಣವಾಗಿ ನ್ಯಾಯಮೂರ್ತಿಗಳು ಧಾರ್ಮಿಕ ಗ್ರಂಥಗಳಿಂದಲೂ ಇತಿಹಾಸ ಗ್ರಂಥಗಳಿಂದಲೂ ಸಂಬಂಧಪಟ್ಟ ಹಲವಾರು ಅಂಶಗಳನ್ನು ಉದ್ಧರಿಸಿದ್ದಾರೆ. ಸಾಮಾಜಿಕ ಸುವ್ಯವಸ್ಥೆ, ನೈತಿಕತೆ, ಆರೋಗ್ಯ ಇವುಗಳಿಗೆ ವಿರುದ್ಧವಾದ ಯಾವುದೇ ಸಾಮಾಜಿಕ ಅನಿಷ್ಟ ಆಚರಣೆಗಳಿಗೆ ಧಾರ್ಮಿಕ ನೆಲೆಯಲ್ಲಿ ರಕ್ಷಣೆಯನ್ನು ಸಂವಿಧಾನವು ನೀಡಲಾಗದು ಎಂದು ನ್ಯಾಯಪೀಠ ಸಾರಿದೆ.

ಸತಿ ಆಚರಣೆ ಅಥವಾ ಅದರ ವೈಭವೀಕರಣವನ್ನು ನಿಷೇಧಿಸಿ ರಾಜಾಸ್ತಾನ ಸರ್ಕಾರ ಹೊರಡಿಸಿರುವ ಸುಗ್ರೀವಾಜ್ಞೆಯ ಸಂವಿಧಾನ ಬದ್ಧತೆಯನ್ನು 'ಧರ್ಮರಕ್ಷಾ ಸಮಿತಿ' ಹೈಕೋರ್ಟಿನಲ್ಲಿ ಪ್ರಶ್ನಿಸಿತ್ತೆಂಬುದನ್ನು ಇಲ್ಲಿ ಸ್ಮರಿಸಬಹುದು.




## ನನ್ನ ನಾಯಿ

ನಮ್ಮ ಮನೆಯಲೊಂದು ಪುಟ್ಟ
ನಾಯಿ ಇರುವುದು
ಎಲ್ಲಿ ಹೋದರದೂ ನನ್ನ
ಜೊತೆಗೇ ಬರುವುದು.
ಒಮ್ಮೆ ನನ್ನ ಜೊತೆ ಅದೂ
ಶಾಲೆಗೆ ಹೊರಟಿತು.
ಬಾಲ ಆಡಿಸುತ್ತಾ ನನ್ನ
ಹಿಂದೆ ಬಂದಿತು.
ಆಗ ನನ್ನ ಕಾಲಿಗೊಂದು
ಮುಳ್ಳು ಚುಚ್ಚಿತು.
ನೋವ ಬಾಧೆಗೆ ನನ್ನ ದೇಹ
ಅಲ್ಲೇ ಕುಸಿಯಿತು.
ಅದನು ಕಂಡು ನನ್ನ ನಾಯಿ
ಅಲ್ಲೇ ನಿಂತಿತು.
ನನ್ನ ಮೂಸಿ ನೋಡಿ
ಕುಂಯಿ ಕುಂಯಿ ಗುಟ್ಟಿತು !
ನನ್ನ ನೆಕ್ಕಿ ಅದು
ಕಣ್ಣೀರ ಸುರಿಸಿತು !
ನನ್ನ ಸುತ್ತ ಸುತ್ತಿ ತುಂಬಾ
ಮರುಕ ಪಟ್ಟಿತು!
ಅದರ ಮರುಕ ನೋಡಿ ನನ್ನ
ಮನವೂ ಮರುಗಿತು !
ಆಗಲೇ ನನ್ನ ನೋವೂ ಕೂಡ
ಮಾಯವಾಯಿತು !

—ಚಾವಲ್ಮನೆ ಸುರೇಶ್ ನಾಯಕ್

## ಭಾಷೆ ತಿಳಿಯದ ದಡ್ಡ ಕೆಲಸ ಕೇಳಿದ

ಒಂದು ಊರಲ್ಲಿ ರಮೇಶ ಎಂಬ ಒಬ್ಬ ಯುವಕನಿದ್ದನು. ಅವನಿಗೆ ಎಲ್ಲಾದರೂ ನೌಕರಿಗೆ ಸೇರಬೇಕೆಂದು ಆಸೆಯಾಯಿತು. ಆದರೆ ಅವನಿಗೆ ಕನ್ನಡ ಬರುತ್ತಿರಲಿಲ್ಲ. ಜೊತೆಗೆ ಚುರುಕು ಸ್ವಭಾವದವನೂ ಅಲ್ಲ.

ಯಾರೋ ಅವನಿಗೆ ಹೇಳಿದರು— ಈ ಊರಲ್ಲಿ ಕನ್ನಡ ಬಾರದಿದ್ದರೆ ನಿನಗೆ ಯಾರು ಕೆಲಸ ಕೊಡುತ್ತಾರೆ? ಆದ್ದರಿಂದ ಸ್ವಲ್ಪವಾದರೂ ಕನ್ನಡ ಮಾತನಾಡಲು ಕಲಿತುಕೋ. ಹೀಗೆಂದು ಹೇಳಿ ಅವರು ಅವನಿಗೆ ಕೆಲವು ಮಾತುಗಳನ್ನು ಹೇಳಿಕೊಟ್ಟರು.

ನಿನ್ನ ಹೆಸರೇನೆಂದು ಕೇಳುತ್ತಾರೆ. ರಮೇಶ ಎನ್ನು. ವಯಸ್ಸೆಷ್ಟು? ಕೇಳುತ್ತಾರೆ. 18 ಎನ್ನು. ಊರು ಯಾವುದು ? ಕೇಳುತ್ತಾರೆ. ತುಮಕೂರು ಎನ್ನು. ಯಾವ ಕೆಲಸವಾದರೂ ಮಾಡುತ್ತೀಯಾ? ಎನ್ನುತ್ತಾರೆ. ಹೂಂ ಅನ್ನು. ಹೀಗೆಂದು ಅವರು ಹೇಳಿಕೊಟ್ಟರು.

ಇವನು ಅದನ್ನೇ ಬಾಯಿ ಪಾಠ ಮಾಡತೊಡಗಿದ— "ರಮೇಶ-18-ತುಮಕೂರು-ಹೂಂ"! ಯಾವಾಗ ನೋಡಿದರೂ ಅದೇ ಆಯಿತು. ಯಾರು ಏನು ಮಾತನಾಡಿಸಿದರೂ ಅದೇ.

ಅಂತೂ ಒಂದು ಕಡೆ ಕೆಲಸಕ್ಕೆ ಕರೆ ಬಂತು. ಇವನನ್ನು ನೋಡಿದ ಅವರು, ಇವನು ಈ ಊರಿನವನಂತೂ ಅಲ್ಲ. ಹೆಸರಾದರೂ ಕೇಳೋಣ ಎಂದು ಕೊಂಡು ಹೆಸರೇನೆಂದು ಕೇಳಿದರು. ರಮೇಶ ಎಂದ. ಊರು ಯಾವುದೆಂದು ಕೇಳಿದರು. ಅವನ ಬಾಯಿ ಪಾಠದಂತೆ ಅವರು ಅವನ ವಯಸ್ಸು ಕೇಳಬೇಕಿತ್ತಷ್ಟೆ. ಹಾಗೆ ಅಂದು ಕೊಂಡು ಹದಿನೆಂಟು ಎಂದ. ನಿನಗೇನು ತಲೆ ಕೆಟ್ಟಿದೆಯಾ?ಎಂದು ಕೇಳಿದರು. 'ತುಮಕೂರು' ಎಂದ.'ಒದೆ ಬೇಕಾ ?' ಎಂದರು. 'ಹೂಂ' ಎಂದು ಬಿಟ್ಟ.

ಅವರೆಲ್ಲ ಇವನ ದಡ್ಡತನಕ್ಕೆ ನೆಗಾಡಿದರು. ಆಮೇಲೆ "ನೋಡು, ನೀನು ಯಾವ ಊರಲ್ಲಿರುತ್ತೀಯೋ, ಅಲ್ಲಿನ ಭಾಷೆ ಕಲಿತುಕೊಳ್ಳಬೇಕು. ಮೊದಲು ಕನ್ನಡ ಭಾಷೆ ಮಾತಾಡಲು ಕಲಿತುಕೋ" ಎಂದು (ಅವನಿಗರ್ಥವಾಗುವ ಹಾಗೆ) ಬುದ್ಧಿವಾದ ಹೇಳಿ ಮನೆಗೆ ಕಳಿಸಿದರು.

—ಕೆ. ಎ. ಅಮೀರ್,
6ನೇ ತರಗತಿ
ಹೆಗ್ಗಾರುಕೊಡಿಗೆ

**1-11-87ರ 'ಚಿನಾರಿ ಕೂಟ'ದ ಪ್ರಶ್ನೆಗಳಿಗೆ ಸರಿಯುತ್ತರಗಳು:**

### I. ತಟ್ಟನೆ ಉತ್ತರಿಸಿ

1) ಮಾತನಾಡಲು ಬರದ ಮೂಕ ನೀರು ಕೇಳಬೇಕಾದರೆ ಕೈಸನ್ನೆ ಮಾಡಿ ಕೇಳುತ್ತಾನೆ. ಕುರುಡ ಕತ್ತರಿ ಕೇಳಬೇಕಾದರೆ ಹೇಗೆ ಕೇಳುತ್ತಾನೆ ?

ಉ: ಅವನಿಗೆ ಬಾಯಿ ಬರುತ್ತದೆ.

2) ಪುಟ್ಟ ರಾಜು ತೆಂಗಿನಮರದ ಬುಡ ಹಿಡಿದು ತಲೆ ಅಲ್ಲಾಡಿಸುತ್ತಾನೆ. ನೀವು ಅಲ್ಲಾಡಿಸಬಲ್ಲಿರಾ ?

ನೀವೂ ಅಲ್ಲಾಡಿಸಬಹುದು — ನಿಮ್ಮ ತಲೆಯನ್ನು.

### II. ಒಗಟುಗಳು

1. ಪಲ್ಲಕ್ಕಿ 2. ಮೂಗುತಿ 3. ತುಟಿ 4. ಆಕಾಶ, ಭೂಮಿ 5. ಮಲ್ಲಿಗೆ ಹೂವು.

(ಎಸ್.ಆರ್. ಉಷಾ, 6ನೇ ತರಗತಿ, ಶಾನುವಳ್ಳಿ—ಈಕೆ ಈ ಐದೂ ಪ್ರಶ್ನೆಗಳಿಗೆ ಸರಿಯುತ್ತರ ಕಳಿಸಿದ್ದಾಳೆ.)

## ಬಸ್ಸಿಗೆ ಕಾದರೆ....

ಮೈತ್ರಿ ಬಸ್ ಬಿದ್ದೋಯ್ತು
ಉದಯ ಬಸ್ ಕೆಟ್ಹೋಯ್ತು
ಶಂಕರ್ ಬಸ್ ನಿಂತೋಯ್ತು
ಶಿವಶಂಕರ್ ಬಸ್ ಓಡೋಯ್ತು
ಕರ್ನಾಟಕ ಬಸ್ ಬರ್ಲೇ ಇಲ್ಲ
ಜನಪ್ರಿಯ ಬಸ್ ಓಡ್ಬಂತು.

## ಒಗಟುಗಳು

1. ತಂದೆ ಆಕಾಶಕ್ಕೆ ಹೋದನು, ತಾಯಿ ಪಾತಾಳಕ್ಕೆ ಹೋದಳು, ಮಗಳು ಮದುವೆಗೆ ಹೋದಳು, ಮಗ ಮಂಗಳೂರಿಗೆ ಹೋದನು. ಏನು ?

2. ಬಾವಿ ಸುತ್ತ ಬೆಳ್ಳಿ ಗೂಟ. ಏನು?

3. ಉದ್ದ ಕೊಯ್ದರೆ ಶಂಖ, ಅಡ್ಡ ಕೊಯ್ದರೆ ಚಕ್ರ, ಮೂಸಿದರೆ ದುಃಖ, ಬಿಡಿಸಿದರೆ ಹತ್ತಿಪ್ಪತ್ತು. ಏನು ?

ಕೆ. ಆರ್. ರಘುವೀರ,
3ನೇ ತರಗತಿ, ಕೊಪ್ಪ.

# ಒಂದು ವರದಕ್ಷಿಣೆ ಸಾವು —

## ಇಡೀ ನಗರವೊಂದರ ಜನತೆಯಿಂದ ಪ್ರಜ್ಞಾವಂತ ಪ್ರತಿಭಟನೆ

ಅಪಾರ ವರದಕ್ಷಿಣೆ ತೆಗೆದುಕೊಂಡು ಮದುವೆಯಾಗುವುದು ಇಂದು ನಮ್ಮ ಸಮಾಜದಲ್ಲಿ ಒಂದು 'ಗೌರವಯುತ' ಪ್ರವೃತ್ತಿಯಾಗಿರುವಂತೆಯೇ, ವರದಕ್ಷಿಣೆ, ಬಳುವಳಿ, ಉಡುಗೊರೆ ಇತ್ಯಾದಿ ತಂದದ್ದು ಸಾಲದೆಂದು ಹೆಣ್ಣನ್ನು ಹಿಂಸಿಸುವುದೋ ಕೊಲೆ ಮಾಡುವುದೋ ಕೂಡ ನಮ್ಮ ಸುತ್ತ ಮುತ್ತ ಬೇಕಾಬಿಟ್ಟಿಯಾಗಿ ನಡೆಯುತ್ತಿದೆ. ಆದರೆ ವರದಕ್ಷಿಣೆಯ ಕಾರಣಕ್ಕೆ ಯುವ ಗೃಹಿಣಿಯೊಬ್ಬಳು ಸಾವನ್ನಪ್ಪಿದಾಗ ಒಂದು ಇಡೀ ನಗರವೇ ಕೋಪೋದ್ರಿಕ್ತವಾಗಿ, ಆಕೆಯ ಗಂಡ ಮತ್ತು ಅತ್ತೆ ಮಾವಂದಿರ ಮೇಲೆ ತಕ್ಷಣ ಕ್ರಮ ಕೈಗೊಳ್ಳುವಂತೆ ಉಗ್ರವಾಗಿ ಪ್ರತಿಭಟಿಸುವುದು ಮಾತ್ರ ತೀರಾ ಅಪರೂಪದ ಸಂಗತಿ.

### ಜಾಗೃತ ಮಾನವೀಯತೆ

ಇಂಥದೊಂದು ಅಪರೂಪದ, ಜಾಗೃತ ಮಾನವೀಯತೆಯ ಪ್ರದರ್ಶನ ಕಳೆದ ತಿಂಗಳು ತಿಪಟೂರಿನಲ್ಲಿ ನಡೆದಿದೆ. ಅಲ್ಲಿನ ಡಾ|| ರಾಮಸ್ವಾಮಿ ಎಂಬ ಶ್ರೀಮಂತ ಮನೆತನದ ಸ್ಫುರದ್ರೂಪಿ ವೈದ್ಯ ಮತ್ತು ಆತನ ತಂದೆ–ತಾಯಿಗಳು ಹಿಂಸೆ ಕೊಟ್ಟ ಕಾರಣ ಆತ್ಮಹತ್ಯೆ ಮಾಡಿಕೊಂಡ, ಕೇವಲ 25ರ ಪ್ರಾಯದ ಶ್ರೀಮತಿ ಶಶಿಕಲಾ, ಒಬ್ಬ ಸುಸಂಸ್ಕೃತ, ಕುಲೀನ ಮನೆತನದ ಹೆಣ್ಣು. ಎಂ. ಎ ಪದವೀಧರೆ.

ಶಶಿಕಲಾ ಅವರಿಗೆ ಅವರ ಗಂಡ ಮತ್ತು ಅತ್ತೆ ಮಾವ ಕೊಡುತ್ತಿದ್ದ ಹಿಂಸೆಯ ಪೂರ್ಣ ವಿವರ ಮತ್ತು ಅವರುಗಳ ಕೆಟ್ಟ ಚಾರಿತ್ರ್ಯದ ಬಗ್ಗೆ ಪೂರ್ತಿ ಗೊತ್ತಿದ್ದ ಅವರ ನೆರೆಹೊರೆಯವರಿಗೆ, ಶಶಿಕಲಾರವರು ಹಠಾತ್ ಸಾವಪ್ಪಿರುವುದು ತಿಳಿದಾಗ ಅದಕ್ಕೆ ಕಾರಣ ಯಾರೆಂದು ಸ್ಪಷ್ಟವಾಗೇ ಗೊತ್ತಿತ್ತು. ಸುದ್ದಿ ಕಾಳ್ಗಿಚ್ಚಿನಂತೆ ಊರೆಲ್ಲ ಹರಡಿ, ಒಂದೆರಡು ಗಂಟೆಗಳಲ್ಲೇ ರಾಮಸ್ವಾಮಿಯ ಮನೆಯೆದುರು ಸಾವಿರಾರು ಜನ ಸೇರಿ, ಅವರಿಗೆ ಉಗ್ರ ಶಿಕ್ಷೆ ವಿಧಿಸಬೇಕೆಂದು ಒತ್ತಾಯಿಸತೊಡಗಿದರು

### "ಕೈಗೆ ಕೋಳ ತೊಡಿಸಿ, ಬೆತ್ತಲೆ ಮೆರವಣಿಗೆ ಮಾಡಿ"

ಅವರ ಕ್ರೋಧ ಎಷ್ಟಿತ್ತೆಂದರೆ, ರಾಮಸ್ವಾಮಿ ಮತ್ತು ಅವನ ತಂದೆಗೆ ಕೈಕೋಳ ತೊಡಿಸಿ, ಅವರನ್ನು ಬೆತ್ತಲೆಗೊಳಿಸಿ, ಊರಿನಲ್ಲಿ ಮೆರವಣಿಗೆ ಮಾಡಿ ಪೋಲೀಸ್ ಠಾಣೆಗೆ ಎಳೆದೊಯ್ಯಬೇಕೆಂದು ಪಟ್ಟು ಹಿಡಿದರು. ಆದರೆ ಕಾನೂನು ಪ್ರಕಾರ ಬೆತ್ತಲೆಗೊಳಿಸುವುದ ಸಾಧ್ಯವಿರದಿದ್ದರಿಂದ ಪೋಲೀಸರು ಅವರುಗಳಿಗೆ ಕೈಕೋಳ ಮಾತ್ರ ತೊಡಿಸಿ, ಊರಿನಲ್ಲಿ ಮೆರವಣಿಗೆ ಮಾಡುವ ಮೂಲಕ ಜನರ ಕೋಪವನ್ನು ಸ್ವಲ್ಪವಾದರೂ ತಣಿಸಬೇಕಾಯಿತು.

### ಉಗಿದರು, ದಿಕ್ಕೇಡಿಗಳಾಗಿಸಿದರು

ಮೆರವಣಿಗೆ ಸಾಗುವಾಗ ರಸ್ತೆಯ ಎರಡೂ ಬದಿ ನೆರೆದಿದ್ದ ಜನ ಸಾಮಾನ್ಯರು ರಾಮಸ್ವಾಮಿಯ ಮೇಲೆ ಕ್ಯಾಕರಿಸಿ ಉಗುಳುತ್ತಿದ್ದರು. ಈ ಪ್ರತಿಭಟನೆ ಇಲ್ಲಿಗೇ ಮುಗಿಯಲಿಲ್ಲ. ಅಪಾದಿತರಿಗೆ ಜಾಮೀನಾಗಲು ಇಡೀ ಊರಲ್ಲಿ ಯಾರೂ ಮುಂದೆ ಬರಲಿಲ್ಲ. ಕೋರ್ಟಿನಲ್ಲಿ ಅವರ ಪರ ವಾದಿಸಲು ತಿಪಟೂರಿನ ಯಾವ ವಕೀಲರೂ ಒಪ್ಪಲಿಲ್ಲ. ಹೀಗಾಗಿ ಚಿಕ್ಕನಾಯಕನಹಳ್ಳಿ ಊರಿನಿಂದ ಕರೆಸಲಾದ ವಕೀಲರೊಬ್ಬರು ಜನರ ಆಕ್ರೋಶ ನೋಡಿ, ಕೋರ್ಟಿಗೆ ವಕಾಲತ್ ಹಾಕದೆಯೇ ವಾಪಸಾದರು. ಕೊನೆಗೆ ತುಮಕೂರಿನ ವಕೀಲರೊಬ್ಬರು ವಕಾಲತ್ ಹಾಕಿದರೆನ್ನಲಾಗಿದೆ.

### ಎಲ್ಲೆಡೆಯಿಂದ ನಿಂದನೆ

ಇಷ್ಟೇ ಅಲ್ಲ. ರಾಮಸ್ವಾಮಿ ಸದಸ್ಯನಾಗಿದ್ದ ತಿಪಟೂರಿನ ರೋಟರಿ ಕ್ಲಬ್ ಆತನ ಸದಸ್ಯತ್ವವನ್ನು ಕಿತ್ತು ಬಿಸಾಕಿತು. ವೈದ್ಯಕೀಯ ಮಂಡಳಿಯ ಸದಸ್ಯತ್ವವನ್ನು ಸಹ ರದ್ದುಪಡಿಸುವಂತೆ ಮನವಿ ಸಲ್ಲಿಸಲು, ತಮ್ಮ ಈ 'ವೃತ್ತಿ ಬಂಧು'ವಿನ ಪೈಶಾಚಿಕ ನಡತೆಯಿಂದ ಅವಮಾನಿತರಾಗಿರುವ ತಿಪಟೂರಿನ ವೈದ್ಯರುಗಳು ನಿರ್ಧರಿಸಿದ್ದಾರಂತೆ. ತಿಪಟೂರಿನ ನಾನಾ ಸಂಘ–ಸಂಸ್ಥೆಗಳು, ವಿದ್ಯಾರ್ಥಿ–ಯುವಜನ ಸಂಘಟನೆಗಳು, ಮಹಿಳೆಯರು; ಗಣ್ಯ ನಾಗರಿಕರು–ಎಲ್ಲರೂ ಒಕ್ಕೊರಲಿನಿಂದ, ತಪ್ಪಿತಸ್ಥರಿಗೆ ಉಗ್ರ ಶಿಕ್ಷೆಯಾಗಬೇಕೆಂದು ಒತ್ತಾಯಿಸುತ್ತಿದ್ದಾರೆ.

### ಪೋಲೀಸರು ಪೋಲೀಸರೇ!

**ಆದರೆ ತಿಪಟೂರಿನ ಪೋಲೀಸರು ಮಾತ್ರ ಈ ಪ್ರಕರಣದಲ್ಲಿ, ಮಾನವೀಯತೆ ಜಾಗೃತಗೊಂಡ ಈ ಪಟ್ಟಣದ ಜನತೆಯ ಕಾಳಜಿಗೆ, ದಿಟ್ಟತನಕ್ಕೆ ಸಂವಾದಿಯಾಗಿ ನಡೆದುಕೊಂಡಿಲ್ಲ ಎಂದು ಬೆಂಗಳೂರಿನ "ಸಂಪರ್ಕ ಮಾಧ್ಯಮಗಳಲ್ಲಿನ ಮಹಿಳೆಯರ ವೇದಿಕೆ"ಯ ಸತ್ಯ ಶೋಧಕ ತಂಡವೊಂದು ವರದಿ ಮಾಡಿದೆ.**

ಶಶಿಕಲಾರವರ ದುರ್ಮರಣದ ಸುದ್ದಿ ಮಧ್ಯಾಹ್ನ 2.30ರ ಹೊತ್ತಿಗೇ ಕಾಳ್ಗಿಚ್ಚಿ

(4ನೇ ಪುಟಕ್ಕೆ)

## ನಮ್ಮ ಸುತ್ತಮುತ್ತ ಕೂಡ ಬಲಿಗಳಾಗುತ್ತಿವೆ, ಬಲ್ಲಿರಾ?

ನಮ್ಮ ಶೃಂಗೇರಿಯಲ್ಲೂ ಇತ್ತೀಚಿಗೆ ಇಂಥದೇ ಕೆಲವು ದುರಂತ ಸಾವುಗಳು ಸಂಭವಿಸಿರುವುದಾಗಿ ತಿಳಿದುಬಂದಿದೆ. ಆದರೆ ನೊಂದವರು ಪೋಲೀಸರಿಗೆ ದೂರು ಸಲ್ಲಿಸದೆ, ತಮ್ಮ ಸಂಕಟವನ್ನು ನುಂಗಿಕೊಂಡು ಸುಮ್ಮನಿದ್ದಾರೆ.

ಈಚೆಗೆ ನಡೆದ ಪ್ರಕರಣ. ಬಹಳ ಸಂಪ್ರದಾಯಸ್ಥ ಗಣ್ಯ ಮನೆತನವೊಂದರಿಂದ ವರದಕ್ಷಿಣೆ ಸಹಿತವಾಗಿ ಮದುವೆ ಮಾಡಿ ಕೊಡಲ್ಪಟ್ಟ, ಅನಂತರವೂ ಆಗೀಗ ಹಣ, ವಸ್ತು ಒಯ್ದಿದ್ದ ಮಗಳು ಒಂದು ಪುಟ್ಟ ಮಗುವನ್ನು ಬಿಟ್ಟು ಇದೇ ರೀತಿ ಧನ ಪಿಶಾಚಿಗೆ ಆಹುತಿಯಾಗಿದ್ದಾಳಂತೆ. ವೃದ್ಧರಾದ ಆಕೆಯ ತಂದೆ ಅತ್ಯಂತ ನೋವು, ಅಸಹಾಯಕತೆಯಿಂದ ಈಗ ಹೇಳುತ್ತಾರಂತೆ— "ಇದೊಂದು ಮಗುವನ್ನು ಹೇಗಾದರೂ ಮಾಡಿ ಚೆನ್ನಾಗಿ ಸಾಕಿ. ಮುಂದೆ ತನಗಿಷ್ಟ ಬಂದ ಜಾತಿಯವರನ್ನು ಮದುವೆಯಾಗಲಿ. ಇಂಥ ದುಃಖವಂತೂ ಯಾರಿಗೂ ಬೇಡ"

ಅದಕ್ಕಿಂತ ಸ್ವಲ್ಪ ಮುಂಚೆ ನಡೆದ ಇನ್ನೊಂದು ಪ್ರಕರಣದಲ್ಲಿ—

ಹುಡುಗಿಯನ್ನು ಹುಡುಗ ಬಹಳ ಇಷ್ಟಪಟ್ಟು ಅವಳೇ ಆಗಬೇಕೆಂದು ಮದುವೆ ಆಗಿದ್ದ. ಅವನ ತಂದೆ ವರದಕ್ಷಿಣೆ ಅಂತ ತೆಗೆದುಕೊಳ್ಳದಿದ್ದರೂ ಮದುವೆಯಲ್ಲೇ ಸಾಕಷ್ಟು ಸುಲಿಗೆ ಮಾಡಿ, ರಂಪ ಮಾಡಿದ್ದ. ಕೊನೆಗೆ ಹುಡುಗನಿಗೆ ಬೇರೆ ಊರಲ್ಲಿ ಕೆಲಸವಾಗಿ, ಹೆಂಡತಿ ಬಸುರಿಯಾಗಿದ್ದುದರಿಂದ ಊರಲ್ಲೇ ಬಿಟ್ಟು ಹೋಗಿದ್ದು, ಮನೆ ಮಾಡುವ ಹವಣಿಕೆಯಲ್ಲಿದ್ದ. ಗಂಡು ಮಗುವಿನ ತಾಯಿಯಾದ ಆಕೆ ಗಂಡನ ಮನೆ–ಮನ ತುಂಬುವ ಕನಸು ಕಾಣುತ್ತಿದ್ದಾಗಲೇ—

ಒಂದು ದಿನ ವಿಷ ತೆಗೆದುಕೊಂಡಿದ್ದಾಳೆಂದು ಆಸ್ಪತ್ರೆಗೆ ಸೇರಿಸಲ್ಪಟ್ಟು ತೀರಿಕೊಂಡಳು. ಆಕೆಯ ಮಾವನೆಂಬ ಧೂರ್ತ ಹೇಳುತ್ತಾನಂತೆ—"ಅವಳ ಅಪ್ಪ–ಅಮ್ಮಂದಿರೇ ನಮ್ಮ ಮೇಲೆ ಅಪಾದನೆ ಬರಿಸಬೇಕೆಂದು ಅವಳಿಗೆ ವಿಷ ಹಾಕಿದ್ದಾರೆ"

ಇಲ್ಲೇ ತೀರ್ಥಹಳ್ಳಿಯ ಕ್ರಿಸ್ತಿಯನ್ ಕುಟುಂಬವೊಂದರಲ್ಲಿ ಕಳೆದ ವಾರವಷ್ಟೇ ಇದೇ ಭೂತಕ್ಕೆ 25–26ರ ತುಂಬು ಯೌವನೆಯೊಬ್ಬರು ಆಹುತಿಯಾದ ಸಂಗತಿ ಬೆಳಕಿಗೆ ಬಂದಿದೆ.

ಕಳೆದ ವರ್ಷ ಮೇಗೂರಿನ ಸಮೀಪದ ಹಳ್ಳಿಯೊಂದರಲ್ಲಿ, ಅಂತೆಯೇ ನ.ರಾ.ಪುರದ ಬಳಿಯ ಹಳ್ಳಿಯೊಂದರಲ್ಲಿ ಇಂಥದೇ ಬಲಿಗಳಾಗಿ, ಸೂಕ್ತ ದೂರು-ಸಾಕ್ಷ್ಯಾಧಾರಗಳಿಲ್ಲದೆ ಮುಚ್ಚಿಹೋಗಿವೆ. ಈ ಎರಡನೇ ಪ್ರಕರಣದಲ್ಲಂತೂ ಹುಡುಗಿಯ ತಂದೆಯವರು ಅತ್ಯುನ್ನತ ಪೋಲೀಸ್ ಅಧಿಕಾರಿಯವರೆಗೂ ದೂರು ಒಯ್ದಿದ್ದಾದರೂ ನ್ಯಾಯ ದೊರಕಿಸಿಕೊಳ್ಳಲಾಗಲಿಲ್ಲ.

ಈ ಭೂತ ಎಲ್ಲೆಲ್ಲೋ ಇರುವುದಲ್ಲ. ಇಲ್ಲೂ, ನಮ್ಮ–ನಿಮ್ಮ ಸುತ್ತಲಲ್ಲೇ ಹೊಂಚು ಹಾಕಿ ಸುಳಿದಾಡುತ್ತಿದೆ, ಬಲ್ಲಿರಾ?

## ಜಾನಪದ ಆಸಕ್ತರ ಗಮನಕ್ಕೆ

ಮಾನ್ಯರೆ,

ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡೆಮಿಯು 1988ರ ಫೆಬ್ರವರಿಯಲ್ಲಿ 'ಜಾನಪದ ಕಮ್ಮಟ'ವನ್ನು ಬೀದರ್‌ನಲ್ಲಿ ನಡೆಸುವ ಯೋಜನೆಯನ್ನು ಹಮ್ಮಿಕೊಂಡಿದೆ. ಈ ಸಲುವಾಗಿ ಜಾನಪದದಲ್ಲಿ ತೀವ್ರವಾದ ಆಸಕ್ತಿಯುಳ್ಳ, ಕರ್ನಾಟಕದ ಎಲ್ಲ ಭಾಗಗಳ ಗೆಳೆಯ, ಗೆಳತಿಯರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಒಂದು ವಾರ ಕಾಲ ನಡೆಯುವ ಈ ಕಮ್ಮಟಕ್ಕೆ ಆಯ್ಕೆಯಾದ ಅಭ್ಯರ್ಥಿಗಳಿಗೆ ಬಂದು ಹೋಗಲು ಬಸ್ಸು ಅಥವಾ ಎರಡನೇ ದರ್ಜೆ ರೈಲು ಪ್ರಯಾಣ ವೆಚ್ಚ ಮತ್ತು ಊಟ–ವಸತಿಯ ಅನುಕೂಲವನ್ನು ಒದಗಿಸಲಾಗುತ್ತದೆ.

ಕಮ್ಮಟದ ಅವಧಿಯಲ್ಲಿ ಜಾನಪದ ತಜ್ಞರಿಂದ ವಿಶೇಷ ಉಪನ್ಯಾಸಗಳು. ಕ್ಷೇತ್ರ ಕಾರ್ಯ, ವಿವಿಧ ಜನಪದ ಸಾಹಿತ್ಯ ಮತ್ತು ಕಲಾ ಪ್ರಕಾರಗಳ ಪ್ರದರ್ಶನ— ಮುಂತಾದ ಕಾರ್ಯಕ್ರಮಗಳು ಇರುತ್ತವೆ. ಈ ಬಗ್ಗೆ ಒಲವುಳ್ಳವರು ಜಾನಪದ ಸಂಬಂಧದ ತಮ್ಮ ಆಸಕ್ತಿ, ಈಗಾಗಲೇ ಕಾರ್ಯಪ್ರವೃತ್ತರಾಗಿದ್ದಲ್ಲಿ ಅದರ ವಿವರಗಳು, ಮುಂದಿನ ಯೋಜನೆಗಳು, ಊರು, ವೃತ್ತಿ, ವಯಸ್ಸು, ಹಿನ್ನೆಲೆ, ಅನುಭವ ವಿಶೇಷಗಳು ಇತ್ಯಾದಿ ಎಲ್ಲ ಮಾಹಿತಿಗಳುಳ್ಳ ಸ್ವಯಂ ಸಿದ್ಧಪಡಿಸಿದ ಅರ್ಜಿಯನ್ನು ದಿನಾಂಕ: 1.1.1988ರ ಒಳಗಾಗಿ ಡಾ|| ಕಾಳೇಗೌಡ ನಾಗವಾರ, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು–6 ಈ ವಿಳಾಸಕ್ಕೆ ಕಳಿಸಿಕೊಡಬೇಕಾಗಿ ವಿನಂತಿ. **ಗಿರಿಜನ ಜಾನಪದದಲ್ಲಿ ಆಸಕ್ತಿಯುಳ್ಳವರಿಗೆ ಆದ್ಯತೆಯನ್ನು ನೀಡಲಾಗುತ್ತದೆ.**

**—ಡಾ|| ಕಾಳೇಗೌಡ ನಾಗವಾರ,**
ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಸದಸ್ಯ ಹಾಗೂ ಜಾನಪದ ಕಮ್ಮಟದ ನಿರ್ದೇಶಕ, ಮೈಸೂರು.

## ಭಣಗುಡುವ ಲೋಕಸಭೆ

(2ನೇ ಪುಟದಿಂದ)

ತಾಸು ಮೊದಲು ಮುಂದೂಡಲಾಯಿತು.

(ಲೋಕಸಭೆಗೆ ಕೋರಂ ಎಂದರೆ ಸದನದ ಕೇವಲ ಹತ್ತರಲ್ಲೊಂದು ಭಾಗ ಸದಸ್ಯರು ಮಾತ್ರ ಹಾಜರಿದ್ದರೆ ಸಾಕು. ಅಷ್ಟೂ ಇರುವುದಿಲ್ಲವೆಂದರೆ !)

### ಗೈರು ಹಾಜರಿಯಲ್ಲಿ ಇತಿಹಾಸ!

ಸದಸ್ಯರೊಬ್ಬರು ಸದನದಲ್ಲಿ ಹೇಳಿಕೆಯೊಂದನ್ನು ನೀಡುತ್ತಿದ್ದರೆ, ಒಬ್ಬ ಸಚಿವರೂ ಹಾಜರಿಲ್ಲದಿದ್ದ 'ಗೈರು ಹಾಜರಿ ಇತಿಹಾಸ'ವೊಂದು ಡಿ. 3ರಂದು ಲೋಕಸಭೆಯಲ್ಲಿ 'ಸೃಷ್ಟಿ'ಯಾಯಿತು.

ಹೇಳಿಕೆ ನೀಡುತ್ತಿದ್ದವರು ಕಾಂಗ್ರೆಸ್ಸಿನ ರಾಂ ಬಿಲಾಸ್ ಪಾಸ್ವಾನ್. ಯಾವ ಸಚಿವರೂ ಹಾಜರಿಲ್ಲದಿರುವುದರಿಂದ ಸದನವನ್ನು ಮುಂದೂಡಬೇಕೆಂದು ಒತ್ತಾಯಿಸಿ ವಿರೋಧ ಪಕ್ಷಗಳವರು ದೊಡ್ಡ ಗಲಾಟೆ ಎಬ್ಬಿಸಿದಾಗ ಸಂಸದೀಯ ವ್ಯವಹಾರಗಳ ರಾಜ್ಯ ಸಚಿವೆ ಶೀಲಾ ದೀಕ್ಷಿತ್ ಓಡುತ್ತಲೇ ಸದನಕ್ಕೆ ಬಂದರು.

ಸರ್ಕಾರದ ಪರವಾಗಿ ಅವರು ಮಾಮೂಲಿನಂತೆ 'ಕ್ಷಮೆ'ಯಾಚಿಸಿದರೂ ತೃಪ್ತರಾಗದ ವಿರೋಧಿ ಸದಸ್ಯರು, ಈ ವಿಷಯದ ಬಗ್ಗೆ ರೂಲಿಂಗ್ ನೀಡುವಂತೆ ಸಭಾಧ್ಯಕ್ಷರಾಗಿದ್ದ [illegible] ಅವರನ್ನು ಒತ್ತಾಯಿಸಿದರು.

(ಸೌಜನ್ಯ : 'ಮುಂಗಾರು')

# ಒಂದು ವರದಕ್ಷಿಣೆ ಸಾವು

(3ನೇ ಪುಟದಿಂದ)

ನಂತೆ ಇಡೀ ಊರಿನಲ್ಲಿ ಹಬ್ಬಿದ್ದರೂ ಪೋಲೀಸರು ರಾಮಸ್ವಾಮಿಯ ಮನೆಗೆ ರಾತ್ರಿ 8 ಗಂಟೆಯಾದರೂ ಹೋಗಿರಲಿಲ್ಲ. ಶಶಿಕಲಾರವರ ಸಂಬಂಧಿಕರು ಮತ್ತು ಪೋಲೀಸರು ರಾಮಸ್ವಾಮಿಯ ಮನೆ ತಲುಪುವಾಗ, ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ಸಾಕ್ಷ್ಯಾಧಾರಗಳನ್ನೂ ರಾಮಸ್ವಾಮಿ ಮುಚ್ಚಿಹಾಕಿಯಾಗಿತ್ತು. ಅಂತೂ ಕೊನೆಗೆ ಪೋಲೀಸರು ಆತನ ಮೇಲೆ ಸಾಕ್ಷ್ಯಾಧಾರಗಳನ್ನು ನಾಶಗೊಳಿಸಿದ ಬಗ್ಗೆಯೂ ಒಂದು ಪ್ರಕರಣ ದಾಖಲು ಮಾಡಿಕೊಂಡಿದ್ದಾರೆ.

### ಪುಟ್ಟ 'ಅನು'

ಶಶಿಕಲಾ ಮೂರೂವರೆ ವರ್ಷದ ಮುದ್ದು 'ಅನು'ವನ್ನು ಅಗಲಿದ್ದಾರೆ. ಅವಳನ್ನೀಗ ಬೆಂಗಳೂರಿನಲ್ಲಿರುವ ಅವರ ತೌರಿನವರು ತಮ್ಮೊಂದಿಗೆ ಕರೆದೊಯ್ದಿದ್ದಾರೆ. "ಏನೇ ಆದರೂ ಅವಳಿಗೆ ಅವಳ ಅಜ್ಜ-ಅಜ್ಜಿಯ (ರಾಮಸ್ವಾಮಿಯ ತಂದೆ - ತಾಯಿಯ) ಸಂಪರ್ಕ ಆಗದಂತೆ ನೋಡಿಕೊಳ್ಳಿ. ನನ್ನ ಒಡವೆಗಳನ್ನು ಮಾರಿಯಾದರೂ ಅವಳನ್ನು ಚೆನ್ನಾಗಿ ಓದಿಸಿ.... ಅವಳಿಗೆ ಮದುವೆಯಾಗುವ ಆಸೆ ಇದ್ದರೆ ಮಾತ್ರ ಮದುವೆ ಮಾಡಿ. ಅದೂ ಅವಳಿಗೆ ಇಷ್ಟವಾದ ವರನೊಡನೆ ಮಾತ್ರ ಮದುವೆ ಮಾಡಿ" ಎಂದು ತನ್ನ ತಂದೆ-ತಾಯಿಗಳನ್ನು ಕುರಿತು ತನ್ನ ಡೈರಿಯಲ್ಲಿ ಶಶಿಕಲಾ ಬರೆದಿದ್ದಾರೆ.

ಆಕೆ ಸಾಯುವ ಹಿಂದಿನ ದಿನ ತನ್ನ ತೌರಿಗೆ ಫೋನ್ ಮಾಡಿ, "ಯಾರಾದರೂ ಬಂದು ನನ್ನನ್ನು ಬೆಂಗಳೂರಿಗೆ ಕರೆದುಕೊಂಡು ಹೋಗಿಬಿಡಿ" ಎಂದಿದ್ದರು. ಅದರಂತೆ ಅಂದೇ ಅವರ ತಮ್ಮ ತಿಪಟೂರಿಗೆ ಹೋದರು. ಆದರೆ ರಾಮಸ್ವಾಮಿ, ಆತನ ಅಣ್ಣ "ನೀವೇನೂ ಯೋಚನೆ ಮಾಡಬೇಡಿ. ನಾವು ಅವಳನ್ನು ಸರಿಯಾಗಿ ನೋಡಿಕೊಳ್ಳುತ್ತೇವೆ" ಎಂದು ನಂಬಿಸಿ ಕಳಿಸಿಕೊಟ್ಟಿದ್ದರು.

### ಕಟ್ಟಿ ಹಾಕಿ ಹೊಡೆದರು

ಅಂದು, "ಮಾವ ಹೋದ ಮೇಲೆ ಮಮ್ಮೀನ ಪಪ್ಪ ಚೆನ್ನಾಗಿ ಹೊಡೆದರು. ಕಟ್ಟಿ ಹಾಕಿದ್ದರು. ತಾತಾನೂ ಮಮ್ಮೀಗೆ ಭಾಳಾ ಹೊಡೀತಿತ್ತು...." ಎನ್ನುತ್ತಾ ಅನು ಮಧ್ಯೆ ಏನೋ ನೆನೆಸಿಕೊಂಡು ಹೆದರಿ ಗಕ್ಕನೆ ಮಾತು ನಿಲ್ಲಿಸುತ್ತಾಳಂತೆ.

### ಕವಿ ಹೃದಯದ ಸುಶೀಲೆ

ಶಶಿಕಲಾರವರ ತಂದೆ ಉನ್ನತ ಉದ್ಯೋಗದಲ್ಲಿ ಮಧ್ಯಪ್ರದೇಶದಲ್ಲಿ ಬಹಳ ವರ್ಷವಿದ್ದು ನಿವೃತ್ತರಾಗಿ ಬೆಂಗಳೂರಲ್ಲಿ ನೆಲೆಸಿದವರು. ಇವರೇ ಕಿರಿಯ ಮಗಳು. ಬರೀ ಕಾಟಾಚಾರದ ಎಂ. ಎ. ಪದವೀಧರೆಯಲ್ಲ ಆಕೆ. ಸಾವಿಗೆ ನಾಲ್ಕೈದು ತಿಂಗಳ ಮೊದಲಿನಿಂದ ಕಾವ್ಯಮಯ ಹಿಂದಿಯಲ್ಲಿ ಆಕೆ ಬರೆದಿಟ್ಟಿರುವ ಡೈರಿ, ಆಕೆ ಅನುಭವಿಸಿದ ಎಲ್ಲ ಬರ್ಬರತೆಯನ್ನು ಕಣ್ಣಿಗೆ ಕಟ್ಟುವಂತೆ ಹೇಳುತ್ತದೆಂದು ಪತ್ರಿಕೆಗಳೆಲ್ಲ ವರದಿ ಮಾಡಿವೆ.

ಆಕೆಯ ಮದುವೆಯನ್ನು ಅದ್ದೂರಿಯಾಗಿಯೇ ಮಾಡಿ ಕೊಡಲಾಗಿತ್ತು. ಆಕೆಯ ಅತ್ತೆ 20 ಸಾವಿರ ರೂ. ವರದಕ್ಷಿಣೆಗೆ ಒಪ್ಪಿದ್ದವರು ನಿಶ್ಚಿತಾರ್ಥದ ದಿನ ಅದನ್ನು 25ಕ್ಕೇರಿಸಿ 'ವಸೂಲಿ' ಮಾಡಿದ್ದರು. 30-40 ತೊಲ ಚಿನ್ನದ ಒಡವೆಗಳನ್ನೂ ಕೊಡಲಾಗಿತ್ತು.

### ಸುಲಿಗೆ, ತಾಳಲಾರದ ಹಿಂಸೆ; ಆತ್ಮಹತ್ಯೆಗೆ ವಿಫಲ ಯತ್ನಗಳು

ಅಷ್ಟೇ ಅಲ್ಲ, ಅನಂತರವೂ ಆಗೀಗ ಹಣ-ವಸ್ತು ರೂಪದಲ್ಲಿ ಸಾಕಷ್ಟು ಸುಲಿದಿದ್ದರು. ಆದರೂ ಸಾಲದೆ ತನಗೊಂದು ಮನೆ ಕಟ್ಟಿಸಿಕೊಡಬೇಕೆಂದೂ, ಬೆಂಗಳೂರಿನ ತೌರಿನ ಮನೆಯಲ್ಲಿ ಒಂದು ಭಾಗ ತನಗೆ ಕೊಡಬೇಕೆಂದೂ, ತನ್ನ ನರ್ಸಿಂಗ್ ಹೋಂ ಕಟ್ಟಲು 1 ಲಕ್ಷ ರೂ ಕೊಡಬೇಕೆಂದೂ— ನಾನಾ ರೀತಿಯ ತಗಾದೆ ಮಾಡುತ್ತ ರಾಮಸ್ವಾಮಿ ಆಕೆಗೆ ತಾಳಲಾರದ ಹಿಂಸೆ ಕೊಟ್ಟಿದ್ದನೆನ್ನಲಾಗಿದೆ.

ಶಶಿಕಲಾ ಈ ಹಿಂದೆಯೂ 2-3 ಬಾರಿ ಆತ್ಮಹತ್ಯೆಗೆ ಯತ್ನಿಸಿದ್ದರು. ಅದನ್ನೆಲ್ಲ ತೌರಿನವರಿಗೆ ತಿಳಿಸದೆ ಮುಚ್ಚಿಡಲಾಗಿತ್ತು. ಆಕೆ ಕೂಡ ತನ್ನ ಕಷ್ಟವನ್ನೆಲ್ಲ ತೌರಿನವರಿಗೆ ತಿಳಿಸುವವರಲ್ಲ. ಆದರೂ ಆ ಬಗ್ಗೆ ಅರಿವಿದ್ದ ತೌರು, ನೇರವಾಗಿ ಮಧ್ಯೆ ಪ್ರವೇಶಿಸಲಾರದೆ ಪರೋಕ್ಷವಾಗಿ ಪರಿಸ್ಥಿತಿ ಸುಧಾರಿಸಲು ಪ್ರಯತ್ನಿಸಿತ್ತು. ಆದರೆ ಈ ಧನ ಪಿಶಾಚಿಗಳು ಸ್ವಲ್ಪವೂ ಸುಧಾರಿಸಲಿಲ್ಲ.

* * *

### ಮಾನವೀಯತೆಯ ಒರತೆಗಾಗಿ

ಈ ದುರಂತದಿಂದ ಇಡೀ ತಿಪಟೂರ ಜನತೆ, ಅದರಲ್ಲೂ ಮುಖ್ಯವಾಗಿ ಸಾಮಾನ್ಯ ಮಹಿಳೆಯರು ತೀವ್ರವಾದ ನೋವನ್ನನುಭವಿಸಿದ್ದಾರೆ. ಅದರ ಕ್ರೂರ ಯಾತನೆಯ ಅರಿವಿನಿಂದ ಎಚ್ಚೆತ್ತಿರುವ ಅವರು, ವರದಕ್ಷಿಣೆಯ ವಿರುದ್ಧ ತಮ್ಮೂರಿನಲ್ಲಿ ಮಾತ್ರವಲ್ಲ, ಇಡೀ ರಾಜ್ಯಾದ್ಯಂತ ಒಂದು ಜನಪ್ರಿಯ ಜನಾಭಿಪ್ರಾಯದ ಅಲೆಯನ್ನ ಉಂಟು ಮಾಡುವ ಯತ್ನಕ್ಕೆ ಕೈ ಹಾಕಿದ್ದಾರೆ. ತಮ್ಮ ಪ್ರಯತ್ನಗಳಿಗೆ ವ್ಯವಸ್ಥಿತ, ಸಂಘಟಿತ ರೂಪು ಕೊಡಲು ಅವರು ವೇದಿಕೆಯೊಂದನ್ನು ಹುಟ್ಟುಹಾಕಿದ್ದಾರೆ.

ದಿನದಿನಕ್ಕೂ ಬರ್ಬರತೆಯನ್ನು ಮೈಗೂಡಿಸಿಕೊಂಡು, ಬದುಕು ಅಸಹನೀಯವಾಗುತ್ತಿರುವ ಈ ನಮ್ಮ ಸಮಾಜದಲ್ಲಿ ಇಂಥ ಪ್ರಯತ್ನಗಳಿಂದಾದರೂ ಒಂದಿಷ್ಟು ಮಾನವೀಯತೆಯ ಒರತೆ ಚಿಮ್ಮೀತೋ....

—ಸಿರಿಮನೆ ನಾಗರಾಜ್.



ಅತ್ತಿಕೊಡಿಗೆ ಮಂಡಲ ಪಂಚಾಯ್ತಿ, ಬಿಳಾಲುಕೊಪ್ಪ,
ಕೊಪ್ಪಾ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ

## ಸಾರ್ವಜನಿಕ ಪ್ರಕಟಣೆ

ಈ ಮೂಲಕ ಅತ್ತಿಕೊಡಿಗೆ ಮಂಡಲ ಪಂಚಾಯ್ತಿ ವ್ಯಾಪ್ತಿಗೊಳಪಟ್ಟ ಸಮಸ್ತ ಜನರಿಗೂ ತಿಳಿಯಪಡಿಸುವುದೇನೆಂದರೆ,

ಅತ್ತಿಕೊಡಿಗೆ ಮಂಡಲ ಪಂಚಾಯ್ತಿ ವ್ಯಾಪ್ತಿಯ ಸರ್ಕಾರಿ ಪ್ರದೇಶಗಳಲ್ಲಿ ಇತ್ತೀಚೆಗೆ ಕೆಲವರು ಅಕ್ರಮವಾಗಿ ಮನೆ ಕಟ್ಟುವ ಪ್ರಯತ್ನದಲ್ಲಿರುವುದು ಕಂಡುಬಂದಿದ್ದು, ಇದು ಕಾನೂನಿನ ಸ್ಪಷ್ಟ ಉಲ್ಲಂಘನೆಯಾಗಿರುತ್ತೆ. ಮತ್ತು ಈ ರೀತಿ ನಿಯಮ ಬಾಹಿರವಾಗಿ ಮನೆ ಕಟ್ಟುವಂತೆ ಕೆಲವು ಪಟ್ಟಭದ್ರ ಹಿತಾಸಕ್ತಿಗಳು ಮುಗ್ಧ ಜನರನ್ನು ಪ್ರಚೋದಿಸುತ್ತಿರುವುದು ಸಹಾ ಮಂಡಲ ಪಂಚಾಯ್ತಿಯ ಗಮನಕ್ಕೆ ಬಂದಿರುತ್ತೆ.

ಹೀಗೆ ಅಕ್ರಮವಾಗಿ ಕಟ್ಟಲ್ಪಡಬಹುದಾದ ಯಾವುದೇ ಕಟ್ಟಡಗಳನ್ನು ಕೆಡವಲು ಮತ್ತು ಅಂತಹವರ ವಿರುದ್ಧ ಸೂಕ್ತ ಕಾನೂನು ಕ್ರಮ ಕೈಗೊಳ್ಳಲು ಮಂಡಲ ಪಂಚಾಯ್ತಿ ಕಾಯಿದೆಯ ಕಲಂ 64, 65 ಮತ್ತು 307ರ ಪ್ರಕಾರ ಮಂಡಲ ಪಂಚಾಯ್ತಿಗೆ ಸಂಪೂರ್ಣ ಅಧಿಕಾರವಿರುತ್ತದೆ. ಆದ್ದರಿಂದ ಕಾನೂನನ್ನು ಉಲ್ಲಂಘಿಸಿ ಯಾವುದೇ ಕಟ್ಟಡಗಳನ್ನು ಯಾರೂ ನಿರ್ಮಿಸಬಾರದೆಂದು ಕೋರಲಾಗಿದೆ. ಅದರ ಬದಲು, ನಿವೇಶನ, ಮನೆ ಇಲ್ಲದ ಬಡವರು ಪಂಚಾಯ್ತಿಗೆ ಅರ್ಜಿ ಸಲ್ಲಿಸಿದಲ್ಲಿ ಅರ್ಹತೆಯನ್ನು ಪರಿಗಣಿಸಿ, ಆದ್ಯತೆಯ ಮೇಲೆ ಎಲ್ಲ ಅರ್ಹ ಅರ್ಜಿದಾರರಿಗೂ ನಿವೇಶನ-ಮನೆ ಮಂಜೂರು ಮಾಡಲಾಗುವುದು.

ಆದರೆ ನಿಯಮ ಬಾಹಿರವಾಗಿ ಯಾರಾದರೂ ಕಟ್ಟಡಗಳನ್ನು ನಿರ್ಮಿಸಿದಲ್ಲಿ ಅಂತಹ ಕಟ್ಟಡಗಳನ್ನು ಕೆಡವಲಾಗುತ್ತದೆ ಮತ್ತು ಅಂತಹವರ ವಿರುದ್ಧ ಸೂಕ್ತ ಕಾನೂನು ಕ್ರಮ ಕೈಗೊಳ್ಳಲಾಗುತ್ತದೆ ಎಂಬ ಅಂಶವನ್ನು ಈ ಮೂಲಕ ಸ್ಪಷ್ಟಪಡಿಸಲಾಗಿದೆ.

ದಿನಾಂಕ : 6-12-1987
ಸ್ಥಳ : ಬಿಳಾಲ್ ಕೊಪ್ಪ

ಮಂಡಲ ಪ್ರಧಾನರು
ಅತ್ತಿಕೊಡಿಗೆ ಮಂಡಲ ಪಂಚಾಯ್ತಿ



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಮುದ್ರಣ : [illegible], ಕೊಪ್ಪ